ಒಂದಾಣೆ ನಾಲೆ 184

# ಭರ್ತೃಹರಿಯ ನೀತಿಶತಕ

## (ದ್ವಿತೀಯ ಭಾಗ)

ಮೂಲಶ್ಲೋಕಗಳು ಮತ್ತು ತಾತ್ಪರ್ಯಸಹಿತ.



ಅನುವಾದಕರು:
**ರಸಿಕ, ಪುತ್ತಿಗೆ.**



ಬೆಲೆ: ಒಂದಾಣೆ.

ಒಂದಾಣೆ ನಾಲೆ, ಮಂಗಳೂರು.

# ಭರ್ತೃಹರಿಯ ನೀತಿಶತಕ

(ಕನ್ನಡ ತಾತ್ಪರ್ಯ ಸಹಿತ)



ಎಲ್ಲರಿಗೂ ಸಂಗ್ರಹಿಸಲನುಕೂಲವಾಗುವಂತೆ 'ಒಂದಾಣೆಮಾಲೆ'ಯ 183, 184 ಮತ್ತು 185ನೇ ಪುಸ್ತಕಗಳಾಗಿ ಪ್ರಕಟವಾಗಿವೆ.

ಈ 184ನೇ ಪುಸ್ತಕ ಕೊಂಡುಕೊಳ್ಳುವಾಗ, ಇದರ ಪ್ರಥಮ ಭಾಗವಾದ ನಂಬ್ರ 183 ಮತ್ತು ತೃತೀಯ ಭಾಗ ನಂಬ್ರ 185ನೇ ಪುಸ್ತಕಗಳನ್ನೂ ಕೊಂಡುಕೊಳ್ಳಿರಿ.



**ಪ್ರತಿಯೊಂದಕ್ಕೆ ಬೆಲೆ ಒಂದಾಣೆ.**

ಎಲ್ಲ ಪುಸ್ತಕ ವ್ಯಾಪಾರಿಗಳಲ್ಲೂ ನ್ಯೂಸ್ ಏಜಂಟರಲ್ಲೂ ದೊರೆವುದು.

ಅಥವಾ


ಒಂದಾಣೆಮಾಲೆ,

ಪ್ರಭಾತ ಆಫೀಸು, ರಥಬೀದಿ, ಮಂಗಳೂರು-1.

# ಭರ್ತೃಹರಿಯ ನೀತಿಶತಕ

## (ದ್ವಿತೀಯ ಭಾಗ)

---

### ಅರ್ಥ ಪದ್ಧತಿ

ಶ್ಲೋ: ಜಾತಿರ್ಯಾತು ರಸಾತಲಂ ಗುಣಗಣಸ್ತತ್ರಾಪ್ಯಧೋಗಚ್ಛ-ತಾಂ ಶೀಲಂ ಶೈಲತಟಾತ್ಪತತ್ವಭಿಜನಃ ಸಂದಹ್ಯತಾಂವಹ್ನಿನಾ ॥ ಶೌರ್ಯೇ ವೈರಿಣಿ ವಜ್ರಮಾಶು ನಿಪತತ್ವರ್ಥೋಽಸ್ತುನಃ ಕೇವಲಂ ಏನ್ಯೈಕೇನವಿನಾ ಗುಣಾಸ್ತೃಣಲವ ಪ್ರಾಯಃಸಮಸ್ತಾ ಇಮೇ ॥ ೩೨ ॥

ತಾ: ಜಾತಿಭ್ರಷ್ಟನಾದಾಗ್ಯೂ, ಗುಣಹೀನನಾದರೂ, ಆಚಾರಹೀನನಾದರೂ, ವಂಶವು ಹಾಳಾಗಿ ಹೋದರೂ, ಶೌರ್ಯಕ್ಕೆ ಬೆಂಕಿಬಿದ್ದು, ಸುಟ್ಟು ಹೋದರೂ, ಮುಖ್ಯವಾಗಿ ಧನವನ್ನು ಸಂಪಾದಿಸಬೇಕು. ಧನವಿಲ್ಲದೆ ಇನ್ಯಾವ ಗುಣಗಳಿದ್ದರೂ ತೃಣಪ್ರಾಯಗಳು. ಅತಃ ಯಾವಾಗಲೂ ದ್ರವ್ಯಾರ್ಜನೆ ಮಾಡಬೇಕೆಂಬ ಭಾವವು.

ಶ್ಲೋ: ಯಸ್ಯಾಸ್ತಿ ವಿತ್ತಂಸನರಃ ಕುಲೀನಃ ಸಪಂಡಿತಃ ಸಶ್ರುತವಾನ್ ಗುಣಜ್ಞಃ । ಸಏವ ವಕ್ತಾಚ ಸದರ್ಶನೀಯಃ ಸರ್ವೇ ಗುಣಾಃ ಕಾಂಚನಮಾಶ್ರಯಂತಿ ॥ ೩೩ ॥

ತಾ: ಯಾವನು ಧನವಂತನೋ ಆತನೇ ಸತ್ಕುಲಪ್ರಸೂತನೂ, ವಿದ್ವಾಂಸನೂ, ಧರ್ಮಶ್ರವಣಕುಶಲನೂ, ವಾಕ್ಪಟುವೂ ಗುಣಗ್ರಾಹಿಯೂ ದಿವ್ಯಸುಂದರನೂ ಆಗಿರುತ್ತಾನೆ. ಯಾಕೆಂದರೆ ಲೋಕದಲ್ಲಿ ಎಲ್ಲಾ ಗುಣಗಳೂ ಕಾಂಚನ(ಧನ)ವನ್ನು ಆಶ್ರಯಿಸುತ್ತವೆ.

ಶ್ಲೋ: ದೌರ್ಮಂತ್ರ್ಯಾತ್ ನೃಪತಿರ್ವಿನಶ್ಯತಿ ಯತಿಃ ಸಂಗಾತ್ ಸುಲೋಲಾಲನಾತ್ ವಿಪ್ರೋ ನಧ್ಯಯನಾತ್ ಕುಲಂಕುತನಯಾತ್ ಶೀಲಂ ಖಲೋಪಾಸನಾತ್ । ಹ್ರೀರ್ಮದ್ಯಾತ್ ಅನವೇಕ್ಷ್ಯಣಾದಪಿಕೃಷಿಃ ಸ್ನೇಹಃ

ಪ್ರವಾಸಾಶ್ರಯಾತ್ ಮೈತ್ರೀಚಾ ಪ್ರಣಯಾತ್ ಸಮೃದ್ಧಿರನಯಾತ್ ತ್ಯಾಗಾತ್ ಪ್ರಮಾದಾದ್ಧನಂ ॥ ೩೪ ॥

ತಾ: ದುಷ್ಟಮಂತ್ರಿಯಿಂದಲೂ ದುರಾಚಾರದಿಂದಲೂ ರಾಜನು ಕೆಡುವನು. ವನಿತಾದಿ ವಿಷಯಲಾಲಸೆಯಿಂದ ಯತಿಯು ಕೆಡುವನು. ಅತಿ ಖಾದ ಪ್ರೀತಿಯಿಂದ ಪುತ್ರನು ಕೆಡುವನು. ಶಾಸ್ತ್ರಾಧ್ಯಯನ ಮಾಡದಿರುವುದರಿಂದ ಬ್ರಾಹ್ಮನು ಕೆಡುವನು. ದುಷ್ಟಸಂಗದಿಂದ ಕುಲವು ಕೆಡುವುದು. ನೀಚ ಸಹವಾಸದಿಂದ ಸದಾಚಾರವು ಕೆಡುವುದು. ವಿವೇಕವು ಮದ್ಯಪಾನದಿಂದ ಹಾಳಾಗುವುದು. ಸರಿಯಾದ ಕಾಲ ನಿರೀಕ್ಷಣೆ ಇಲ್ಲದೆ ಬೇಸಾಯವು ಕೆಡುವುದು, ಪತ್ನೀಪುತ್ರರ ಮೋಹವು ಪರದೇಶಗಮನದಿಂದ ಕೆಡುವುದು ಪರಸ್ಪರ ಅನುರಾಗವಿಲ್ಲದಿರುವುದರಿಂದ ಮಿತ್ರತ್ವವು ಕೆಡುವುದು. ದಾನದಿಂದಲೂ ಪ್ರಮಾದದಿಂದಲೂ ಧನವು ಕೆಡುವುದು.

ಶ್ಲೋ: ದಾನಂ ಭೋಗೋನಾಶಸ್ತಿಸ್ರೋಗತಯೋ ಭವಂತಿ ವಿತ್ತಸ್ಯ । ಯೋನದದಾತಿ ನ ಭುಂಕ್ತೇ ತಸ್ಯ ತೃತೀಯಾ ಗತಿರ್ಭವತಿ ॥ ೩೫ ॥

ತಾ: ಲೋಕದಲ್ಲಿ ಹಣದ ನಾಶಕ್ಕೆ ಮೂರು ದಾರಿಗಳಿವೆ: ಸತ್ಪಾತ್ರನಲ್ಲಿ ದಾನ, ಸುಖಪಡುವಿಕೆ, ಕಳ್ಳಕಾಕರಿಂದ ಚೌರ್ಯವಾಗುವಿಕೆ. ಯಾವನು ಒಂದನೇ ಎರಡನೇ ದಾರಿಯಲ್ಲಿ ಧನವನ್ನು ವ್ಯಯಮಾಡದಿರುವನೋ ಅಂಥವನ ಧನಕ್ಕೆ ಮೂರನೇ ದಾರಿಯು (ಕಳ್ಳಕಾಕರ ಭಯವು) ಕಾಣಾಗಿ ಬರುವುದು.

ಶ್ಲೋ: ಮಣಿಶ್ಶಾಣೋಲ್ಲೀಢಸಮರ ವಿಜಯೀ ಹೇತಿದಳಿತೋ ಮದಕ್ಷೀಣೋನಾಗಃ ಶರದಿಸರಿದಾಶ್ಯಾನಪುಲಿನಾ । ಕಳಾ ಶೇಷಃ ಚಂದ್ರಃ ಸುರತಮೃದಿತಾ ಬಾಲವನಿತಾತನಿಮ್ನಾ ಶೋಭಂತೇ ಗಳಿತ ವಿಭವಾಶ್ಚಾರ್ಥಿಷು ನರಾಃ ॥ ೩೬ ॥

ತಾ: (ದಾನಿಗೆ ಬಡತನವೂ ಅಲಂಕಾರವೇ ಆಗಿದೆ). ಸಾಣೆ ಹಿಡಿಯಲ್ಪಟ್ಟ ರತ್ನವು, ರಣದಲ್ಲಿ ಗಾಯಹೊಂದಿದ ವೀರನು, ಮದಹೀನವಾದ ಆನೆಯು, ಒಣಗಿದ ಮರಳು ದಿನ್ನೆಯುಳ್ಳ ನದಿಯು, ಕಳಾಮಾತ್ರವಿರುವ ಚಂದ್ರನು, ಸುರತದಿಂದ ಸೋತ ನಾರಿಯು, ಸೂಕ್ಷ್ಮಭಾವದಿಂದ ಹೇಗೆ

ಪ್ರಕಾಶಿಸುವನೋ ಅಂತೇ ದಾನಶೂರರು ಧನವನ್ನೆಲ್ಲಾ ಸೂರೆಮಾಡಿದರೂ, ಯಾಚಕರ ದೃಷ್ಟಿಯಿಂದ ಪ್ರಕಾಶಮಾನರೇ ಆಗಿರುವರು.

ಶ್ಲೋ: ಪರಿಕ್ಷೀಣಃ ಕಶ್ಚಿತ್ ಸ್ಪೃಹಯತಿ ಯವನಾಂ ಪ್ರಸೃತ ಯಸ ಪಶ್ಚಾತ್ ಸಂಪೂರ್ಣಃ ಕಲಯತಿ ಧರಿತ್ರೀಂ ತೃಣ ಸಮಾಂ । ಅತಶ್ಚಾನೇಕಾಂತ ಗುರು ಲಘು ತಯಾರ್ಥೇಷು ಧನಿನಾಮವಸ್ಥಾವಸ್ತೂನಿ ಪ್ರದಯತಿ ಚ ಸಂಕೋಚಯತಿ ಚ ॥ ೩೭ ॥

ತಾ: ಧನಿಕನು ಕಾಲಗತಿಯಿಂದ ಬಡವನಾದರೆ ಒಂದು ಸಾರೆಗಾಗಿ ಒಂದು ಹಿಡಿ ಧಾನ್ಯವನ್ನು ಬೇಡುತ್ತಾನೆ, ಮಹತ್ವವಾದ ವಸ್ತುವೆಂದು ತಿಳಿಯುತ್ತಾನೆ. ಅತನೇ ಫಕ್ಕನೆ ಧನಿಕನಾದರೆ ಭೂಮಿಯನ್ನೇ ತೃಣ ಸಮಾನವೆಂದು ಬಗೆಯುತ್ತಾನೆ. ಅಂದರೆ ಧನಮದವು ಮಹತ್ವವನ್ನು ತೃಣಸಮಾನವಾಗಿಯೂ ಬಡತನವು ತೃಣವನ್ನು ಮಹತ್ತಾಗಿಯೂ ಗಣಿಸುವುದಾದುದರಿಂದ ಇಂಥ ಅವಿವೇಕವು ವಿವೇಕಿಗಳಿಗೆ ಸಲ್ಲದು ಎಂಬ ಅರ್ಥವು.

ಶ್ಲೋ: ರಾಜನ್ ದುಧುಕ್ಷಸಿಯಂದಿಕ್ಷಿತಿಧೇನು ಮೇನಾಂ ತೇನಾದ್ಯವತ್ಸ ವಿವಲೋಕ ಮಮುಂಪುಷಾಣ । ತಸ್ಮಿಂಶ್ಚ ಸಮ್ಯಗನಿಶಂ ಪರಿಪುಷ್ಯಮಾಣೇ ನಾನಾ ಫಲಂಫಲತಿ ಕಲ್ಪಲತೇವ ಭೂಮಿಃ ॥ ೩೮ ॥

ತಾ: ಎಲೈ ರಾಜನೇ, ನೀನು ಆಕಳಿನೋಪಾದಿಯಲ್ಲಿರುವ ಭೂಮಿಯನ್ನು ಕರೆದು ಧನವೆಂಬ ಹಾಲನ್ನು ಪಡೆಯಲಿಚ್ಛಿಸುವೆಯಾದರೆ ಈಗಿರುವ ಪ್ರಜೆಗಳೆಂಬ ಕರುಗಳನ್ನು ಮಮತೆಯಿಂದ ಸಾಕು. ಆಗ ಭೂಮಿಯೆಂಬ ಆಕಳು ಕಲ್ಪಲತೆಯಂತೆ ಫಲ ಪುಷ್ಪ, ಧನ ಧಾನ್ಯಗಳನ್ನು ಫಲಿಸುವಳು.

ಶ್ಲೋ: ಸತ್ಯಾನೃತಾಚ ಪರುಷಾ ಪ್ರಿಯಭಾಷಿಣೀಚ ಹಿಂಸ್ರಾ ದಯಾಳುರಪಿ ಚಾರ್ಥಪರಾವಧಾನ್ಯಾ । ನಿತ್ಯವ್ಯಯಾ ಪ್ರಚುರ ನಿತ್ಯ ಧನಾಗಮಾಚ ವಾರಾಂಗನೇವ ನೃಪನೀತಿರನೇಕರೂಪಾ ॥ ೩೯ ॥

ತಾ: (ರಾಜನ ನೀತಿಯು ಬಹು ವಿಧವಾದುದೆಂದು ವಿವರಿಸುತ್ತಾನೆ). ಸತ್ಯವನ್ನು ಹೇಳುವುದು, ಸುಳ್ಳಾಡುವುದು, ಕಠಿನಮಾತಾಡುವುದು, ಪ್ರಿಯ ಭಾಷಣಮಾಡುವುದು, ದಯಾಳುವೂ ಘಾತುಕವೂ ಆಗಿರುವುದು, ದಾನ

ಸಮರ್ಥವೂ, ಅರ್ಥಲೋಭಿಯೂ ಆಗಿರುವುದು, ನಿತ್ಯ ನಿತ್ಯವೂ ಹಣವನ್ನು ನೀರಿನಂತೆ ಸಂಪಾದಿಸುವುದೂ, ಖರ್ಚುಮಾಡುವುದೂ, ಕೂಡಾ ರಾಜನೀತಿಯು ಬಹುಮುಖಗಳು. ಅತಃ ರಾಜನೀತಿಯು ವಾರಾಂಗನೆಯಂತೆ ಬಹುರೂಪಿಯಾಗಿದೆ.

ಶ್ಲೋ: ಆಜ್ಞಾಕೀರ್ತಿಃ ಪಾಲನಂ ಬ್ರಾಹ್ಮಣಾನಾಂ ಧಾನಂ ಭೋಗೋ ಮಿತ್ರ ಸಂರಕ್ಷಣಂ ಚ । ಏಷಾ ಮೇತೇ ಷಡ್ಗುಣಾ ನ ಪ್ರವೃತ್ತಾಃ ಕೋರ್ಥಸ್ತೇಷಾಂ ಪಾರ್ಥಿವೋ ಪಾಶ್ರಯೇಣ ॥ ೪ ॥

ತಾ: ಆಜ್ಞಾಪಾಲನೆಯಿಂದ ಕೂಡಿದ ಶಾಸನವು, ಅದರಿಂದ ಬರುವ ಕೀರ್ತಿಯು, ವಿದ್ವಜ್ಜನರ ಪೋಷಣೆಯು, ಸತ್ಪಾತ್ರನಲ್ಲಿ ದಾನಮಾಡುವ ಸುಬುದ್ಧಿಯು, ವನಿತಾದಿ ವಿಷಯ ಭೋಗಜ್ಞಾನವು, ಮಿತ್ರರಕ್ಷಣೆಯು ಎಂಬ ಆರು ಗುಣಗಳು ಯಾವನಲ್ಲಿ ಇರುವುದಿಲ್ಲವೊ ಅಂಥವನ ಆಶ್ರಯದಿಂದ ಯಾವ ಲಾಭವು? ಅರ್ಥಾತ್ ರಾಜನಲ್ಲಿ ಈ ಆರು ಗುಣಗಳು ಇರಬೇಕು.

ಶ್ಲೋ: ಯದ್ಧಾತ್ರಾ ನಿಜ ಫಾಲ ಪಟ್ಟಲಿಖಿತಂ ಸ್ತೋಕಂ ಮಹದ್ವಾಧನಂ ತತ್ ಪ್ರಾಪ್ನೋತಿ ಮರುಸ್ಥಲೇಪಿನಿತರಾಂ ಮೇರೌ ಚ ನಾತೋಧಿಕಂ ॥ ತದ್ಧೀರೋ ಭವ ವಿತ್ತವತ್ಸುಕೃಪಣಾಂ ವೃತ್ತಿಂ ವೃಥಾ ಮಾಕೃಥಾಃ ಕೂಪೇಪಶ್ಯಪಯೋನಿ ಧಾವಪಿ ಘಟೋ ಗೃಹ್ಣಾತಿ ತುಲ್ಯಂ ಜಲಂ ॥ ೪೧ ॥

ತಾ: (ಲಾಭಾಲಾಭಗಳು ದೈವಾಧೀನವಾದುದರಿಂದ ಕಾರ್ಪಣ್ಯವನ್ನು ಮಾಡಬಾರದೆಂದು ಹೇಳುತ್ತಾನೆ). ಬ್ರಹ್ಮಲಿಖಿತದಿಂದ ಎಷ್ಟು ದ್ರವ್ಯವು ಲಭಿಸತಕ್ಕದೋ ಅದು ಮರುಳುಗಾಡಿನಲ್ಲೂ ಲಭಿಸುತ್ತದೆ. ಬಂಗಾರದ ಬೆಟ್ಟವೆಂದು ಮೇರುಗಿರಿಯನೇರಿದರೂ, ಬ್ರಹ್ಮಲಿಖಿತಕ್ಕಿಂತ ಅಧಿಕ ದೊರೆಯದು. ಹೇಗೆ ಸಣ್ಣ ಗಡಿಗೆಯು ಕೊಳದಲ್ಲೂ ಸಮುದ್ರದಲ್ಲೂ ತನ್ನ ಅಳವಿರುವಷ್ಟೆ ನೀರನ್ನು ಹೊಂದುವುದೊ ಹಾಗೆಯೇ ಯೋಗವಿದ್ದಷ್ಟೇ ಭಾಗ್ಯ ಬರುವುದು.

## ದುರ್ಜನ ಪದ್ಧತಿ

ಶ್ಲೋ: ಅಕರುಣತ್ವಮಕಾರಣ ವಿಗ್ರಹಃ ಪರಧನೇ ಪರಯೋಷಿತಿಚ ಸ್ಪೃಹಾ । ಸುಜನಬಂಧುಜನೇಷ್ವಸಹಿಷ್ಣುತಾ ಪ್ರಕೃತಿಸಿದ್ಧಮಿದಂಹಿ ದುರಾತ್ಮನಾಂ ॥ ೪೨ ॥

ತಾ: ನಿರ್ದಯೆಯೂ, ನಿಷ್ಕಾರಣ ಕಲಹವೂ, ಪರದ್ರವ್ಯಾಪಹಾರ ಬುದ್ಧಿಯೂ, ಪರಾಂಗನಾ ಸಂಭೋಗ ಅಭಿಲಾಷೆಯೂ, ಸಜ್ಜನರಲ್ಲೂ ಬಂಧುಗಳಲ್ಲೂ ಅಸಹನೆಯೂ ಮೊದಲಾದ ಗುಣಗಳು ದುರ್ಜನರಿಗೆ ಸ್ವಭಾವಸಿದ್ಧವಾದ ಗುಣಗಳಾದ ಕಾರಣ, ಆ ದುರ್ಜನರು ಧನಿಕರಾದರೂ ಸ್ನೇಹಯೋಗ್ಯರಲ್ಲ.

ಶ್ಲೋ: ದುರ್ಜನಃ ಪರಿಹರ್ತವ್ಯೋ ವಿದ್ಯಯಾಲಂಕೃತೋಪಿಸನ್ । ಮಣಿನಾ ಭೂಷಿತಃ ಸರ್ಪೋ ಕಿಮಸಾನ ಭಯಂಕರಃ ॥ ೪೩ ॥

ತಾ: ದುರ್ಜನನು ವೇದ ವೇದಾಂಗಗಳ ಪಂಡಿತನಾದಾಗ್ಯೂ ಕೂಡಾ ತ್ಯಾಜ್ಯನು. ಯಾಕೆಂದರೆ ಮಣಿಯಿಂದ ಕೂಡಿದ್ದರೂ ಸರ್ಪವು ಹೇಗೆ ವಿಷಜಂತುವಾದ ಕಾರಣದಿಂದ ಸ್ನೇಹಯೋಗ್ಯವಲ್ಲವೋ ಅಂತೇ ದುರ್ಜನನೂ ಕೂಡಾ ಸ್ನೇಹಯೋಗ್ಯನಲ್ಲ.

ಶ್ಲೋ: ಜಾಡ್ಯಂ ಹ್ರೀಯ ಗಣ್ಯತೇತಿ ವ್ರತಶುಚೌ ದಂಭಶ್ಶುಚೌ ಕೈತವಂ ಶೂರೇ ನಿರ್ಘೃಣತಾ ಮುನೌ ವಿಮತಿತಾ ದೈನ್ಯಂ ಪ್ರಿಯಾಲಾಪಿನೀ ತೇಜಸ್ವಿನ್ಯವಲಿಪ್ತತಾ ಮುಖರತಾ ವಕ್ತ್ರವ್ಯಶಕ್ತಿ ಸ್ಥಿರೇತತ್ಕೋನಾಮಗುಣೋ ಭವೇತ್ಸಗುಣಿನಾಂ ಯೋ ದುರ್ಜನೈಃ ನಾಂಕಿತಃ ॥ ೪೪ ॥

ತಾ: ದುರ್ಜನರು ಎಲ್ಲಾ ಗುಣಗಳನ್ನೂ ದೂರುತ್ತಾರೆ. ವಿವೇಕಿಯನ್ನು ಪಾಪಭೀರುವನ್ನು ಬುದ್ಧಿಮಾಂದ್ಯವುಳ್ಳವನೆಂದೂ, ವ್ರತ ನಿಯಮಾದಿಗಳಿಂದ ಪರಿಶುದ್ಧನನ್ನು ಡಂಭಾಚಾರಿಯೆಂದೂ, ಸ್ವಭಾವತಃ ಪರಿಶುದ್ಧನನ್ನು ಕಪಟಿಯೆಂದೂ, ಶೂರರನ್ನು ದಯಾಹೀನರೆಂದೂ, ಮಾನವಶೀಲನಾದ ಮುನಿಯನ್ನು ಬುದ್ಧಿಹೀನನೆಂದೂ, ಪ್ರಿಯವಚನವನ್ನಾಡುವವನನ್ನು ದೀನನೆಂದೂ, ತೇಜಸ್ವಿಯನ್ನು ದುರಹಂಕಾರಿಯೆಂದೂ, ಪ್ರತ್ಯುತ್ಪನ್ನ ಬುದ್ಧಿ ಉಳ್ಳವನನ್ನು(ತತ್ಕಾಲದಲ್ಲಿ ಸಂದರ್ಭಕ್ಕೆ ಸರಿಯಾಗಿ ಮಾತಾಡುವವ)

ಅಸಂಬದ್ಧ ಪ್ರಲಾಪಿಯೆಂದೂ ನಿಂದಿಸುತ್ತಾರೆ. ಇದು ಅವರ ಸ್ವಭಾವ ಸಿದ್ಧಗುಣವಲ್ಲದೆ ಇನ್ನೇನೂ ಅಲ್ಲ.

ಶ್ಲೋ: ಲೋಭಶ್ಚೇದ ಗುಣೇನಕಿಂ ಪಿಶುನತಾ ಯದ್ಯಸ್ತಿ ಕಿಂ ಪಾತಕೈಃ ಸತ್ಯಂ ಚೇತ್ತಪಸಾ ಚ ಕಿಂ ಶುಚಿಮನೋ ಯದ್ಯಸ್ತಿತೀರ್ಥೇನಕಿಂ ॥ ಸಾಜನ್ಯಂ ಯದಿಕಿಂಬಲೇನಮಹಿಮಾಯದ್ಯಸ್ತಿಕಿಂಮಂಡನೈಃ ಸದ್ವಿದ್ಯಾ ಯದಿ ಕಿಂಧನೈರಪಯಶೋ ಯದ್ಯಸ್ತಿ ಕಿಂ ಮೃತ್ಯುನಾ ॥ ೪೫ ॥

ತಾ: (ಇಲ್ಲಿ ಗುಣಾವಗುಣಗಳ ವಿಮರ್ಶೆಯಾಗಿದೆ): ಧನಲೋಭವು ಇದ್ದರೆ ದುರ್ಗುಣಗಳು ಬೇರೆ ಬೇಕಿಲ್ಲ. ಲೋಭತ್ವವೇ ದುರ್ಗುಣಗಳ ಮೂಲವು. ಪರದೂಷಣೆಯಂಥ ಕೆಟ್ಟ ಸ್ವಭಾವವಿದ್ದರೆ ಆತನು ಬ್ರಹ್ಮಹತ್ಯೆಯೇ ಮೊದಲಾದ ಪಾತಕಗಳನ್ನು ಮಾಡಬೇಕಿಲ್ಲ. ಅದೇ ಈ ಪಾತಕ ಫಲವನ್ನು ತರುತ್ತದೆ. ಸತ್ಯಪ್ರಿಯತೆಯೂ ಯಥಾರ್ಥ ಭಾಷಣವೂ ಇದ್ದುದಾದರೆ ಚಾಂದ್ರಾಯಣಾದಿ ವ್ರತಾದಿಗಳನ್ನು ಮಾಡಿ ಪುಣ್ಯ ಸಂಪಾದಿಸಬೇಕೆಂದಿಲ್ಲ. ಅವುಗಳೇ ಪುಣ್ಯಪ್ರದಗಳಾಗಿವೆ. ಪರಿಶುದ್ಧವಾದ ಮನಸ್ಸಿದ್ದರೆ ಗಂಗಾಸ್ನಾನಮಾಡಬೇಕಿಲ್ಲ. ಗಂಗಾಸ್ನಾನದ ಫಲವು ಪರಿಶುದ್ಧ ಮನಸ್ಸಿನಿಂದಲೇ ದೊರೆಯುತ್ತದೆ. ಸೌಜನ್ಯತೆಯು ಇದ್ದುದಾದರೆ ಆತನಿಗೆ ಬಂಧು ಬಳಗದ ಬಲ ಬೇಕಾಗಿಲ್ಲ. ಸೌಜನ್ಯವೇ ಆತನ ಬಳಗ, ಬಲ. ಉತ್ತಮ ಚಾರಿತ್ರ್ಯ ಮಾಹಾತ್ಮ್ಯ ಇದ್ದರೆ ಕುಂಡಲಹಾರಾದಿ ಅಲಂಕಾರಗಳು ಬೇಕಿಲ್ಲ. ಶ್ರೇಷ್ಠವಾದ ವಿದ್ಯಾಧನವು ಇದ್ದುದಾದರೆ ಬೇರೆ ಧನರಾಶಿಯ ಆವಶ್ಯಕತೆಯಿಲ್ಲ. ಮನುಷ್ಯನಿಗೆ ಅಪಕೀರ್ತಿಯು ಬಂದದ್ದೇ ಆದರೆ ಆತನಿಗೆ ಮರಣವು ಬೇರೆ ಪ್ರತ್ಯೇಕವಾಗಿರಬೇಕಿಲ್ಲ.

ಶ್ಲೋ: ಶಶೀ ದಿವಸ ಧೂಸರೋ ಗಳಿತ ಯೌವನಾಕಾಮಿನೀ ಸರೋವಿಗತವಾರಿಜಂ ಮುಖಮನಕ್ಷರಂ ಸ್ವಾಕೃತೇಃ । ಪ್ರಭುಃ ಧನಪರಾಯಣಃ ಸತತ ದುರ್ಗತಿಃಸಜ್ಜನೋನೃಪಾಂಗಣತಃ ಖಲೋ ಮನಸಿ ಸಪ್ತ ಶಲ್ಯಾನಿಮೇ ॥ ೪೬ ॥

ತಾ: ಹಗಲಿನಲ್ಲಿ ಮಲಿನನಾಗಿ ಕಾಣುವ ಚಂದ್ರನೂ, ಮುದುಕಿಯಾದ ಕಾಮಿನಿಯೂ, ಕಮಲವಿಲ್ಲದ ಕೊಳವೂ, ಶಾಸ್ತ್ರಾಧ್ಯಯನ ಮಾಡ

ದಿರುವ ಪುರುಷನೂ, ಧನಲೋಭಿಯಾದ ಅರಸನೂ, ಅನವರತವೂ ದರಿದ್ರ ನಾಗಿರುವ ಸಜ್ಜನನೂ, ರಾಜಾಂಗಣದಲ್ಲಿರುವ ನೀಚನೂ ಎಂಬ ಏಳು ಬಗೆಗಳು ಮನಸ್ಸಿಗೆ ಶೂಲದಂತೆ ನಾಟುತ್ತಿವೆ. ಅತಃ ಇವುಗಳಿಗೆ ಇಂಥಾ ಸಂಬಂಧ ಬರಬಾರದೆಂದು ಭಾವವು.

ಶ್ಲೋ: ನಕಶ್ಚಿಚ್ಚಂಡಕೋಪಾನಾಂ ಮಾತ್ಮೀಯೋ ನಾವು ಭೂಭುಜಾಂ । ಹೋತಾರಮಪಿಜುಹ್ವಾನಂ ಸ್ಪೃಷ್ಟೋದಹತಿಪಾವಕಃ ॥ ೪೭ ॥

ತಾ: ಪ್ರಚಂಡ ಕೋಪಿಷ್ಠನಾದ ಅರಸನಿಗೆ ಆತ್ಮೀಯರಾದವರು ಯಾರೂ ಇರಲಾರರು. ಅವನಿಗೆ ಆತವರೂ ಅಹಿತರೂ ಒಂದೇ. ಯಜಮಾನನೂ ಯಾಜಕನೂ ಯಾವ ರೀತಿಯಲ್ಲಿ ಅಗ್ನಿಗೆ ಹಿತವನ್ನು ಮಾಡುವವರಾದರೂ ಮುಟ್ಟಿದರೆ ಸುಡುವುದೋ ಅಂತೇ ಕೋಪಿಷ್ಠನಾದ ಅರಸನ ಸ್ವಭಾವವು.

ಶ್ಲೋ: ಮೌನಾನ್ಮೂಕಃ ಪ್ರವಚನ ಪಟುಃ ವಾಚಕೋಜಲ್ಪಕೋವಾ ದೃಷ್ಟಃ ಪಾರ್ಶ್ವೇ ಭವತಿಕವಸನ್ ದೂರತೋಪ್ಯಪ್ರಗಲ್ಭಃ । ಕ್ಷಾಂತ್ಯಾಭೀರುಃ ಯದಿನ ಸಹತೇ ಪ್ರಾಯಕೋನಾಭಿಜಾತಃ ಸೇವಾಧರ್ಮಃ ಪರಮಗಹನೋ ಯೋಗಿನಾಮಪ್ಯಗಮ್ಯಃ ॥ ೪೮ ॥

ತಾ: ಅರಸನ ಆಶ್ರಯವು ಬಹಳ ಕಠಿನವೆಂದೆನ್ನುತ್ತಾ ಹೇಳುತ್ತಾನೆ: ಮೌನದಿಂದಿದ್ದರೆ ಮೂಕನೆಂದೂ, ಮಾತಿನಲ್ಲಿ ಚತುರನಾದರೆ ಬಹುಭಾಷಿಯೆಂತಲೂ, ಯಾವಾಗಲೂ ಹತ್ತಿರವೇ ಇದ್ದರೆ ಅಹಂಕಾರಿಯೆಂದೂ, ದೂರ ಹೋದರೆ ಪುಕ್ಕಲು ಸ್ವಭಾವದವನೆಂದೂ, ಸಹನೆ ಉಳ್ಳವನಾದರೆ ಅಸಮರ್ಥನೆಂದೂ, ಅಸಹನೆಯಿಂದ-(ದುಷ್ಟಕೃತ್ಯವನ್ನು ಸಹಿಸದಿರುವಿಕೆ) ಕೂಡಿದವನಾದರೆ ನೀಚಕುಲದಲ್ಲಿ ಹುಟ್ಟಿದವನಾಗಿರಬಹುದೆಂದೂ ಊಹಿಸುತ್ತಾನೆ. ಆದುದರಿಂದ ಯೋಗಿಗಳಿಗೂ ಅಸಾಧ್ಯವಾದ ಸೇವಾಧರ್ಮವು ಮಾನವ ಮಾತ್ರನಿಗೆ ಅಸಾಧ್ಯವು.

ಶ್ಲೋ: ಉದ್ಭಾಸಿತಾ ಖಿಲಖಲಸ್ಯ ವಿಶೃಂಖಲಸ್ಯ ಪ್ರೋದ್ಗಾಢವಿಸ್ಮೃತ ನಿಜಾಧಮ ಕರ್ಮವೃತ್ತೇಃ । ದೈವಾದವಾಪ್ತ ವಿಭವಸ್ಯಗುಣ ದ್ವಿಷೋಸ್ಯ ನೀಚಸ್ಯಗೋಚರಗತೈಸ್ಸುಖಮಾಸ್ಯತೇಕೈಃ ॥ ೪೯ ॥

ತಾ: ನೀಚರಿಗೆ ಅಧಿಕಾರಗಳನ್ನು ಕೊಟ್ಟು ಸ್ವೇಚ್ಛಾಚಾರದಿಂದ ತಿಳಿಗೇಡಿಯಾಗಿ, ತನ್ನ ಜನ್ಮಾಂತರದ ಅಧಮ ಕೃತ್ಯಗಳನ್ನು ಮರೆತು ದೈವಾಯತ್ತವಾಗಿ ಬಂದ ಐಶ್ವರ್ಯದಿಂದ ಮತ್ತನಾಗಿ ಸುಗುಣ ದ್ವೇಷಿಯಾದ ನೀಚನಾದ ಅರಸನ ದೇಶದಲ್ಲಿ ಯಾವನೂ ಸುಖವನ್ನು ಹೊಂದಲಾರನಾದುದರಿಂದ ಬುದ್ಧಿಶಾಲಿಯು ಇಂಥ ರಾಜನ ಆಶ್ರಯದಲ್ಲಿ, ರಾಜ್ಯದಲ್ಲಿ ಕ್ಷಣಮಾತ್ರವೂ ವಾಸಮಾಡಲಾರನು.

ಶ್ಲೋ: ಆರಂಭಗುರ್ವೀ ಕ್ಷಯಿಣೀ ಕ್ರಮೇಣ ಲಘ್ವೀಪುರಾವೃದ್ಧಿಮುಪೈತಿ ಪಶ್ಚಾತ್ । ದಿವಸ್ಯಪೂರ್ವಾರ್ಧಪರಾರ್ಧಭಿನ್ನಾಃ ಛಾಯೇವ ಮೈತ್ರೀ ಖಲಸಜ್ಜನಾನಾಂ ॥ ೫೦ ॥

ತಾ: ದುರ್ಜನರ ಸ್ನೇಹವು ಪ್ರಾತಃಕಾಲದ ನೆರಳಿನಂತೆ ಆರಂಭದಲ್ಲಿ ಬಹಳವಾಗಿದ್ದು, ಕ್ರಮೇಣ ನಶಿಸುತ್ತಾ ಹೋಗುವುದು. ಸಜ್ಜನರ ಸ್ನೇಹವು ಅಪರಾಹ್ನ ಕಾಲದ ನೆರಳಿನಂತೆ ಆರಂಭದಲ್ಲಿ ಸ್ವಲ್ಪವಾಗಿದ್ದು ಕ್ರಮೇಣ ಬೆಳೆಯುತ್ತಾ ಹೋಗುವುದು. ಇದನ್ನರಿತೇ ಸ್ನೇಹಸಂಪಾದನೆಯನ್ನು ಮಾಡುವುದು.

ಶ್ಲೋ: ಮೃಗಮೀನ ಸಜ್ಜನಾನಾಂ ತೃಣಜಲ ಸಂತೋಷ ವಿಹಿತ ವೃತ್ತೀನಾಂ । ಲುಬ್ಧಕ ಧೀವರ ಪಿಶುನಾನಿ ಷ್ಕಾರಣ ಮೇವ ವೈರಿಣೋ ಜಗತಿ ॥ ೫೧ ॥

ತಾ: ಕಾಡಿನ ಹುಲ್ಲನ್ನು ತಿಂದು ಜೀವಿಸುವ ಜಿಂಕೆಗೆ ಬೇಡನು ವಿನಾಕಾರಣ ವೈರಿಯಾಗುವನು. ಅಂತೇ ನೀರಿನಲ್ಲಿ ವಾಸಿಸುವ ಮೀನಿಗೆ ಬೆಸ್ತನು ಕಾರಣವಿಲ್ಲದೆ ಶತ್ರುವಾಗುವನು. ಪರೋಪಕಾರಮಾಡುತ್ತಾ ಸಂತೋಷದಿಂದ ಜೀವಿಸುವ ಸಜ್ಜನರಿಗೆ ದುಷ್ಟರು ವಿನಾಕಾರಣ ಪೀಡಿಸುವರು. ಅತಃ ಕಾರಣವಿಲ್ಲದೇನೇ ಸಜ್ಜನರನ್ನು ದುಷ್ಟರು ಪೀಡಿಸುವರೆಂಬ ಅರ್ಥವು.

## ಸುಜನ ಪದ್ಧತಿ

ಶ್ಲೋ: ವಾಂಛಾ ಸಜ್ಜನ ಸಂಗತೌ ಪರಗುಣೇ ಪ್ರೀತಿಃ ಗುರೌ ನಮ್ರತಾ ವಿದ್ಯಾಯಾಂವ್ಯಸನಂಸ್ವಯೋಷಿತಿರತಿಃ ಲೋಕಾಪವಾದಾತ್ ಭಯಂ ।

ಭಕ್ತಿಶ್ಚಕ್ರಿಣಿ ಶಕ್ತಿರಾತ್ಮದಮನೇ ಸಂಸರ್ಗ ಮುಕ್ತಿಃ ಖಲೈಃ ಏತೇಯೇಷು ವಸಂತಿ ನಿರ್ಮಲಗುಣಾಸ್ತೇಭ್ಯೋಮಹದ್ಭ್ಯೋ ನಮಃ ॥ ೫೨ ॥

ತಾ: ಸಾಧುಜನರ ಸಹವಾಸದಲ್ಲಿ ಅಭಿಲಾಷೆಯೂ, ಬೇರೆಯವರ ಉತ್ತಮ ಗುಣಗಳಲ್ಲಿ ಪ್ರೀತಿಯೂ, ಗುರುಗಳಲ್ಲಿ ನಮ್ರಭಾವವೂ, ವಿದ್ಯಾಭ್ಯಾಸದಲ್ಲಿ ಆಸಕ್ತಿಯೂ, ಪರಸ್ತ್ರೀಯಲ್ಲಿ ಆಸಕ್ತಿ ಇಲ್ಲದೆ ತನ್ನ ಪತ್ನಿಯಲ್ಲೇ ಪ್ರೀತಿಯೂ, ಲೋಕಾಪವಾದ ಭಯವೂ, ಕ್ಷುದ್ರದೇವತೆಗಳಲ್ಲಿ ಭಯವಿಲ್ಲದೆ ಹರಿಯಲ್ಲಿಯೇ ಭಕ್ತಿಯೂ, ತನ್ನ ಆತ್ಮಕ್ಕೆ ಅಪಮಾನವಾಗಲು ಶೌರ್ಯ ಸಾಮರ್ಥ್ಯವೂ, ದುರ್ಜನರೊಡನೆ ಸಂಗತ್ಯಾಗವೂ ಇರುವಂಥ ನಿರ್ಮಲ ಗುಣಯುಕ್ತರಾದ ಪುರುಷರನ್ನು (ಮಹಾತ್ಮರನ್ನು) ವಂದಿಸುತ್ತೇನೆ. ಈ ಶ್ಲೋಕದಲ್ಲಿ ಸುಜನರ ಗುಣಗಳನ್ನು ಹೇಳಲಾಗಿದೆ.

ಶ್ಲೋ: ವಿಪದಿ ಧೈರ್ಯಮಥಾಭ್ಯುದಯೇ ಕ್ಷಮಾ ಸದಸಿ ವಾಕ್ಪಟುತಾ ಯುಧಿವಿಕ್ರಮಃ । ಯಶಸಿ ಚಾಭಿರತಿರ್ವ್ಯಸನಂ ಶ್ರುತೌಪ್ರಕೃತಿ ಸಿದ್ಧಮಿದಂಹಿ ಮಹಾತ್ಮನಾಂ ॥೫೩॥

ತಾ: ಆಪತ್ಕಾಲದಲ್ಲಿ ಧೈರ್ಯವೂ, ಸಂಪತ್ತು ಬಂದಾಗ ಸಹನೆಯೂ, ಸಭೆಯಲ್ಲಿ ಸರಸ ವಚನ, ವಾಕ್ಪಟುತ್ವವೂ, ಕೀರ್ತಿ ಸಂಪಾದಿಸುವುದರಲ್ಲಿ ಆಸಕ್ತಿಯೂ, ಯುದ್ಧದಲ್ಲಿ ಪರಾಕ್ರಮವೂ, ವೇದಾಧ್ಯಯನದಲ್ಲಿ ಆಸಕ್ತಿಯೂ, ಮಹಾತ್ಮರಾದ ಸುಜನರ ಸ್ವಭಾವಸಿದ್ಧ ಗುಣಗಳಾಗಿವೆ.

ಶ್ಲೋ: ಕರೇಶ್ಲಾಘ್ಯಸ್ತ್ಯಾಗಶ್ಶಿರಸಿ ಗುರುಪಾದ ಪ್ರಣಯಿತಾ ಮುಖೇ ಸತ್ಯಾ ವಾಣೀ ವಿಜಯಿಭುಜಯೋರ್ವೀರ್ಯಮತುಲಂ । ಹೃದಿಸ್ವಚ್ಛಾವೃತ್ತಿಃ ಶ್ರುತಮಧಿಗತಂ ಚ ಶ್ರವಣಯೋರ್ವಿನಾಪ್ಯೈಶ್ವರ್ಯೇಣ ಪ್ರಕೃತಿಮಹತಾಂ ಮಂಡನಮಿದಂ ॥ ೫೪ ॥

ತಾ: ಮಹಾತ್ಮರ ಆಭರಣಗಳು ಇವು:— ಕೈಗೆ ದಾನ ಮಾಡುವ ಭೂಷಣವೂ, ಶಿರಸ್ಸಿಗೆ ಕಿರೀಟ ಸಮಾನವಾದ ಗುರುಪಾದ ವಂದನೆಯೂ, ತಾಂಬೂಲದಂತೆ ಬಾಯಿಗೆ ಸತ್ಯವಾಕ್ಯವೂ, ಭುಜಕೀರ್ತಿಯ ಬದಲಾಗಿ ಪರಾಕ್ರಮವೂ, ಹೃದಯಕ್ಕೆ ಹಾರಗಳ ಬದಲಾಗಿ ನಿಷ್ಕಾಪಟ್ಯತೆಯೂ, ಕಿವಿ

ಗಳಿಗೆ ಕುಂಡಲಗಳ ಬದಲಾಗಿ ಶಾಸ್ತ್ರಶ್ರವಣವೂ ಅಲಂಕಾರವಾಗಿದೆ. ಆದು ದರಿಂದ ಎಲ್ಲರೂ ಇವನ್ನೇ ಆಭರಣವಾಗಿ ಹೊಂದಲು ಹವಣಿಸಬೇಕು.

ಶ್ಲೋ: ಪ್ರಾಣಾ ಘಾತಾನ್ನಿವೃತ್ತಿ: ಪರಧನಹರಣೇ ಸಂಯಮಃ ಸತ್ಯ ವಾಕ್ಯಂ ಕಾಲೇ ಶಕ್ತ್ಯಾ ಪ್ರದಾನಂ ಯುವತಿಜನಕಥಾ ಮೂಕಭಾವಃ ಪರೇ- ಷಾಂ ‖ ತೃಷ್ಣಾ ಸ್ರೋತೋ ವಿಭಂಗೋಗುರುಷು ಚ ವಿನಯಃ ಸರ್ವ ಭೂತಾನುಕಂಪಾ ಸಾಮಾನ್ಯಂ ಸರ್ವಶಾಸ್ತ್ರೇಷ್ವನು ಪಹತವಿಧಿಃ ಶ್ರೇಯಸಾ ಮೇಷ ಪಂಥಾಃ ‖ ೫೫ ‖

ತಾ: ಗುಣಾಢ್ಯತ್ವವು ಯಶಸ್ಸಿಗೆ ಕಾರಣವೆನ್ನುವುದನ್ನು ಸಮರ್ಥಿ ಸುತ್ತಾ ಹೇಳಿದ್ದಾನೆ. ಪ್ರಾಣಿಹಿಂಸೆ ಮಾಡದಿರುವಿಕೆಯೂ, ಪರದ್ರವ್ಯ ಅಪ ಹಾರಮಾಡದಿರುವಿಕೆಯೂ, ಸತ್ಯವಚನವೂ, ತನ್ನ ಸಂಪತ್ತಿಗನುಗುಣವಾಗಿ ದಾನವೂ, ಪರಸ್ತ್ರೀ ವರ್ಣನೆಯಲ್ಲಿ ಮೂಕಭಾವವೂ, ಯಾಚಕರ ಆಸೆ ಯನ್ನು ಯಥಾಶಕ್ತಿ ಪೂರ್ತಿಮಾಡುವಿಕೆಯೂ, ಅತ್ಯಾಸೆ ಇಲ್ಲದಿರುವಿಕೆಯೂ, ಗುರುಹಿರಿಯರಲ್ಲಿ ನಮ್ರಭಾವವೂ, ಜೀವದಯಾಪರತೆಯೂ, ಯಾವನಲ್ಲಿ ಇರುವುವೋ ಆತನು ಶ್ರೇಯಸ್ಸಿಗೆ ಪಾತ್ರನಾಗುತ್ತಾನೆ. ಯಾಕೆಂದರೆ ಈ ಗುಣಗಳೇ ಶಾಸ್ತ್ರಪ್ರತಿಪಾದಿತ ಗುಣಗಳು.

ಶ್ಲೋ: ಸಂಪತ್ಸುಮಹಾತಾಂ ಚಿತ್ತಂ ಭವೇದುತ್ಪಲ ಕೋಮಲಂ । ಆಪತ್ಸು ಚ ಮಹಾಶೈಲಶಿಲಾ ಸಂಘಾತಕರ್ಕಶಂ ‖ ೫೬ ‖

ತಾ: ಸಂಪತ್ತು ಬಂದಾಗ ಸುಜನರ ಮನಸ್ಸು ನಳಿನಕೋಮಲವಾಗಿ ರುತ್ತದೆ. ಆಪತ್ತಿನ ಕಾಲದಲ್ಲಿ ಕಲ್ಲಿನಂತೆ ಕಠೋರವಾಗಿರುತ್ತದೆ.

ಶ್ಲೋ: ಪ್ರಿಯಾನ್ಯಾಯ್ಯಾ ವೃತ್ತಿ: ಮಲಿನಮಸುಭಂಗೇಪ್ಯಸುಕರಂ ತ್ವಸಂತೋನಾಭ್ಯರ್ಥ್ಯಾಃ ಸುಹೃದಪಿನಯಾಚ್ಯಃ ಕೃಶಧನಃ। ವಿಪದ್ಯುಚ್ಚೈಃ ಸ್ಥೈರ್ಯಂ ಪದಮನುವಿಧೇಯಂ ಚ ಮಹತಾಂಸತಾಂ ಕೇನೋದ್ದಿಷ್ಟಂ ವಿಷಮ ಮಸಿಧಾರಾವ್ರತಮಿದಂ ‖ ೫೭ ‖

ತಾ: ನ್ಯಾಯವನ್ನು ಬಿಡದೆ ಜೀವಿಸುವಿಕೆಯು ಪ್ರಿಯವಾಗಿದ್ದು, ಪ್ರಾಣಾಪಾಯ ಸಮಯದಲ್ಲೂ ದುಷ್ಕರ್ಮ ಮಾಡದಿರುವುದು, ಕುಹಕಿ ಗಳನ್ನು ಯಾಚಿಸದಿರುವುದು, ಬಂಧುವಾದರೂ ದರಿದ್ರನೊಡನೆ ಬೇಡದಿರು

ವುದು, ಆಪತ್ಕಾಲದಲ್ಲಿ ಹೆಚ್ಚಿನ ಧೈರ್ಯವೂ, ಚಿತ್ತಸ್ಥೈರ್ಯವೂ ಇರುವುದೂ, ಸಜ್ಜನರಿಗೆ ಸ್ವಭಾವಸಿದ್ಧ ವಿಷಯಗಳಾದರೂ ಇದನ್ನು ಆಚರಿಸುವುದು ಕತ್ತಿಯ ಅಲುಗಿನ ಮೇಲೆ ನಡೆಯುವಂತೆ (ಅಸಿಧಾರಾ ವೃತದಂತೆ).

ಶ್ಲೋ: ಪ್ರಧಾನಂಪ್ರಚ್ಛನಂಗೃಹಮುಪಗತೇ ಸಂಭ್ರಮವಿಧಿಃ ಪ್ರಿಯಂ ಕೃತ್ವಾ ಮೌನಂಸದಸಿ ಕಥನಂ ಚಾಪ್ಯುಪಕೃತೇಃ । ಅನುತ್ಸೇಕೋಲಕ್ಷ್ಮ್ಯಾಂ ನಿರಭಿಭವಸಾರಾಃ ಪರಕಥಾಸ್ಸತಾಂ ಕೇನೋದ್ದಿಷ್ಟಂ ವಿಷಮಮಸಿಧಾರಾ ವೃತಮಿದಂ ॥ ೫೮ ॥

ತಾ: ಪ್ರಕಾಶಪಡಿಸದೆ ಗುಪ್ತವಾಗಿ ದಾನ ಮಾಡುವಿಕೆಯೂ, ಅತಿಥಿಯು ಮನೆಗೆ ಬಂದಾಗ ಆದರಾತಿಥ್ಯಗಳನ್ನು ಮಾಡಿ ಇಷ್ಟಾರ್ಥವನ್ನು ನೆರವೇರಿಸಿ ಯಾರಿಗೂ ತಿಳಿಸದೆ ತಾವು ಪರರಿಂದ ಪಡೆದ ಉಪಕಾರಗಳನ್ನು ರಾಜ ವಿದ್ವತ್ ಸಭೆಗಳಲ್ಲಿ ಪ್ರಕಟಪಡಿಸುತ್ತಾ, ಸಿರಿಬಂದ ಕಾಲದಲ್ಲಿ ಗರ್ವವಿಲ್ಲದವರಾಗಿ, ಬೇರೆಯವರನ್ನು ನಿಂದಿಸದೆ ಇರುವುದು ಅಸಿಧಾರಾವೃತದಂತೆ ಕಠಿನವಾದಾಗ್ಯೂ ಸಜ್ಜನರಿಗೆ ಸ್ವಭಾವಸಿದ್ಧವಾಗಿ ಬಂದ ಗುಣಗಳಾಗಿವೆ

ಶ್ಲೋ: ಸಂತಪ್ತಾಯಸಿ ಸಂಸ್ಥಿತಸ್ಯಪಯಸೋ ನಾಮಾಪಿ ನಶ್ರೂಯತೇ ಮುಕ್ತಾಕಾರತಯಾತದೇವನಲಿನೀ ಪತ್ರಸ್ಥಿತಂದೃಶ್ಯತೇ । ಅಂತಃ ಸಾಗರಶುಕ್ತಿ ಮಧ್ಯಪತಿತಂ ತನ್ಮೌಕ್ತಿಕಂಜಾಯತೇ, ಪ್ರಾಯೇಣಾ ಧಮ ಮಧ್ಯಮೋತ್ತಮಜುಷಾಮೇವಂ ವಿಧಾವೃತ್ತಯಃ ॥ ೫೯ ॥

ತಾ: ಕಾದ ಕಬ್ಬಿಣದ ಮೇಲೆ ಹಾಕಿದ ನೀರ ಹನಿಯು ಹೇಳ ಹೆಸರಿಲ್ಲದೆ ಹಾರಿಹೋಗುತ್ತದೆ. ಅದೇ ನೀರ ಹನಿಯು ಕಮಲದೆಲೆಯ ಮೇಲೆ ಬಿದ್ದಾಗ ಮುತ್ತಿನಂತೆ ಕಾಣುತ್ತದೆ. ಅದೇ ನೀರಿನ ಹನಿಯು ಸಮುದ್ರ ಮಧ್ಯದಲ್ಲಿರುವ ಕಪ್ಪೆಯ ಚಿಪ್ಪಿನ ಮೇಲೆ ಬಿದ್ದರೆ ಅದು ಮುತ್ತಾಗುವುದು. ಅಂತೇ ನೀಚರನ್ನೂ ಮಧ್ಯಮರನ್ನೂ ಆಶ್ರಯಿಸಿದ ಮನುಷ್ಯನು ಏನನ್ನೂ ಹೆಚ್ಚಾಗಿ ಪಡೆಯಲಾರನು. ಆದರೆ ಉತ್ತಮರನ್ನು ಆಶ್ರಯಿಸಿದ ಪುರುಷನು ಕೀರ್ತಿವಂತನಾಗುತ್ತಾನೆ.

ಶ್ಲೋ: ಯಃ ಪ್ರೀಣಯೇತ್ಸು ಚರಿತ್ರೈಃ ಪಿತರಂಸಪುತ್ರೋಯತ್ ಭರ್ತುರೇವಹಿತ ಮಿಚ್ಛತಿತತ್ಕಳತ್ರಂ । ತನ್ಮಿತ್ರಮಾಪದಿಸುಖೇ ಚ ಸಮ ಕ್ರಿಯಂಯದೇತತ್ತ್ರಯಂ ಜಗತಿ ಪುಣ್ಯಕೃತೋಲಭಂತೇ ॥ ೬೦ ॥

ತಾ: ಯಾವ ಪುತ್ರನು ತನ್ನ ತಂದೆಯನ್ನು ಸದಾಚಾರ ನಡತೆಗಳಿಂದ ಸಂತೋಷಪಡಿಸುತ್ತಾನೋ ಅಂಥಾ ಪುತ್ರನನ್ನು, ಯಾವಾಗಲೂ ಗಂಡನ ಹಿತವನ್ನೇ ಬಯಸುವ ಸತಿಯನ್ನು, ಆಪತ್ಕಾಲದಲ್ಲೂ ಸುಖ ಕಾಲದಲ್ಲೂ ಒಂದೇ ರೀತಿಯಲ್ಲಿ ಸಹಕರಿಸುವ ಮಿತ್ರನನ್ನೂ ಸಂಪಾದಿಸುವ ಭಾಗ್ಯವು ಪುಣ್ಯವಂತರಿಗೇ ಲಭಿಸುವುದು.

ಶ್ಲೋ: ನಮ್ರತ್ವೇನೋನ್ನಮಂತಃ ಪರಗುಣಕಥನೈಃ ಸ್ವಾನ್‌ಗುಣಾನ್ ಖ್ಯಾಪಯಂತಃ ಸ್ವಾರ್ಥಾನ್ ಸಂಪಾದಯಂತೋ ವಿತತಪೃಥುತರಾರಂಭಯತ್ನಾಃ ಪರಾರ್ಥೇ ॥ ಕ್ಷಾಂತ್ಯೈವಾಕ್ಷೇಪ ರೂಕ್ಷಾಕ್ಷರಮುಖರ ಮುಖಾನ್ ದುರ್ಜನಾನ್ ದುಃಖಯಂತಃ ಸಂತಃ ಸಾಶ್ಚರ್ಯಚರ್ಯಾಜಗತಿ ಬಹುಮತಾಃ ಕಸ್ಯನಾಭ್ಯರ್ಚನೀಯಾಃ ॥ ೬೧ ॥

ತಾ: ತಾವು ನಮ್ರರಾಗಿಯೇ ಉತ್ತಮ ಸ್ಥಿತಿಯನ್ನು ಹೊಂದುವವರಾಗಿಯೂ, ಬೇರೆಯವರ ಸದ್ಗುಣಗಳನ್ನು ಪ್ರಖ್ಯಾಪನ (ಎತ್ತಿ ಹೇಳುವಿಕೆ) ಮಾಡುವುದರ ಮೂಲಕ ತನ್ನ ಉತ್ತಮ ಗುಣಗಳನ್ನು ಪ್ರಕಾಶಗೊಳಿಸುತ್ತ ಬೇರೆಯವರಿಗೆ ಉಪಕಾರಗಳನ್ನೇ ಮಾಡುತ್ತಾ ತಮ್ಮ ಪ್ರಯೋಜನಗಳನ್ನು ಸಂಪಾದಿಸುವ ಶಾಂತಿಯಿಂದಲೇ ದುರ್ಜನರನ್ನು ಸಂಕಷ್ಟಕ್ಕೀಡುಮಾಡುತ್ತಾ ಆಶ್ಚರ್ಯಕಾರಕವಾದ ನಡತೆಯಿರುವ ಸಜ್ಜನರು ಸರ್ವಮಾನ್ಯರು.



ಈ ಪುಸ್ತಕದ ಪ್ರಥಮ ಭಾಗ ನಂಬ್ರ 183ನೇ ಪುಸ್ತಕವನ್ನೂ ತೃತೀಯ ಭಾಗ ನಂಬ್ರ 185ನೇ ಪುಸ್ತಕವನ್ನೂ ಈ ಪುಸ್ತಕದೊಂದಿಗೇ ಕೊಂಡುಕೊಳ್ಳಿರಿ.

Edited, Printed & Published by K. V. Shenoy
at the Prabhat Printers, Ltd., Mangalore'